

# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1033 |
| ವಿಧಾನ ಪರಿಷತ್ ಸದಸ್ಯರ ಹೆಸರು | : | ಶ್ರೀ ಆರ್. ಧರ್ಮಸೇನ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸುವ ದಿನಾಂಕ | : | 10-03-2021 |
| ಉತ್ತರಿಸುವ ಸಚಿವರು | : | ಸಮಾಜ ಕಲ್ಯಾಣ ಸಚಿವರು. |

<table>
<tr><th>ಕ್ರ. ಸಂ.</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಅಂಬೇಡ್ಕರ್ ಭವನ ಜಗಜೀವನರಾಂ ಭವನ ಮತ್ತು ವಾಲ್ಮೀಕಿ ಭವನಗಳನ್ನು ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಲ್ಲಿ ತಲಾ ಎಷ್ಟು ನಿರ್ಮಿಸಲಾಗಿದೆ; ಎಷ್ಟು ಪೂರ್ಣವಾಗಿವೆ; ಎಷ್ಟು ನಿರ್ಮಾಣವಾಗಬೇಕಾಗಿದೆ;</td><td>ಸಮಾಜ ಕಲ್ಯಾಣ ಇಲಾಖೆ ಮತ್ತು ಪರಿಶಿಷ್ಟ ವರ್ಗಗಳ ಕಲ್ಯಾಣ ಇಲಾಖೆಯ ವತಿಯಿಂದ ಮೈಸೂರು ಮತ್ತು ಚಾಮರಾಜನಗರ ಜಿಲ್ಲೆಗಳಿಗೆ ಮಂಜೂರು ಮಾಡಿರುವ ಡಾ॥ ಬಿ.ಆರ್. ಅಂಬೇಡ್ಕರ್ ಭವನ ಮತ್ತು ಡಾ॥ ಬಾಬು ಜಗಜೀವನರಾಂ ಭವನ ಮತ್ತು ವಾಲ್ಮೀಕಿ ಭವನಗಳ ಪ್ರಗತಿ ವಿವರ ಈ ಕೆಳಕಂಡಂತಿರುತ್ತದೆ.<br><br>
<table>
<tr><th>ಜಿಲ್ಲೆ</th><th>ಮಂಜೂರಾದ ಭವನಗಳ ಸಂಖ್ಯೆ</th><th>ಪೂರ್ಣಗೊಂಡಿರುವ ಭವನಗಳ ಸಂಖ್ಯೆ</th><th>ನಿರ್ಮಾಣವಾಗಬೇಕಿರುವ ಭವನಗಳ ಸಂಖ್ಯೆ</th></tr>
<tr><td>ಮೈಸೂರು</td><td>448</td><td>139</td><td>309</td></tr>
<tr><td>ಚಾಮರಾಜನಗರ</td><td>185</td><td>85</td><td>100</td></tr>
</table>
</td></tr>
<tr><td>ಆ)</td><td>ಈ ಭವನಗಳ ನಿರ್ಮಾಣ ಕಾರ್ಯ ವಿಳಂಬವಾಗುತ್ತಿರುವುದಕ್ಕೆ ಕಾರಣಗಳೇನು;<br>ಎಸ್.ಸಿ.ಪಿ ಮತ್ತು ಟಿ.ಎಸ್.ಪಿ ಯೋಜನೆಯ ಹಣವನ್ನು ಬಳಸಿಕೊಂಡು ಶೀಘ್ರವಾಗಿ ಈ ಕಾರ್ಯ ಮಾಡಲು ಸರ್ಕಾರಕ್ಕಿರುವ ತೊಂದರೆಗಳೇನು;</td><td rowspan="2">ಮಂಜೂರಾತಿ ನೀಡಲಾದ ಭವನಗಳ ನಿರ್ಮಾಣ ಸಂಬಂಧವಾಗಿ ಸೂಕ್ತ ನಿವೇಶನವನ್ನು ಗುರುತಿಸಿ, ಇಲಾಖೆಯ ವಶಕ್ಕೆ ಪಡೆಯುವುದರೊಂದಿಗೆ, ಲಭ್ಯವಿರುವ ನಿವೇಶನಕ್ಕನುಗುಣವಾಗಿ ಸರ್ಕಾರಿ ನಿರ್ಮಾಣ ಏಜೆನ್ಸಿಗಳ ವತಿಯಿಂದ ಅಂದಾಜು ಪಟ್ಟಿಗಳನ್ನು ಪಡೆದ ನಂತರ ಕಾಮಗಾರಿಗಳನ್ನು ಪ್ರಾರಂಭಿಸಲಾಗುತ್ತಿದೆ. ಇದಲ್ಲದೇ, ಇಲಾಖೆಯ ವಶಕ್ಕೆ ಪಡೆದ ನಿವೇಶನಗಳಲ್ಲಿ ಕಾಮಗಾರಿಗಳನ್ನು ಪ್ರಾರಂಭಿಸುವ ಸಂದರ್ಭದಲ್ಲಿ ನಿವೇಶನದ ಒಡೆತನಕ್ಕೆ ಸಂಬಂಧಿಸಿದಂತೆ ಸಮಸ್ಯೆಗಳು ಉದ್ಭವವಾಗುತ್ತಿರುವುದರಿಂದ, ಭವನಗಳ ಕಟ್ಟಡ ನಿರ್ಮಾಣ ಕಾಮಗಾರಿಯ ಪ್ರಗತಿಯಲ್ಲಿ ವಿಳಂಬವಾಗಲು ಕಾರಣವಾಗಿದೆ.<br><br>ಮಂಜೂರಾತಿ ಮೊತ್ತಕ್ಕೆ ಅನುಗುಣವಾಗಿ ಭವನಗಳ ಭೌತಿಕ ಹಾಗೂ ಆರ್ಥಿಕ ಪ್ರಗತಿ ವರದಿಯನ್ನು ಆಧರಿಸಿ ಅನುದಾನವನ್ನು ಬಿಡುಗಡೆ ಮಾಡುವ ಮೂಲಕ ಪ್ರಗತಿಯಲ್ಲಿರುವ ಭವನಗಳ ಕಟ್ಟಡ ನಿರ್ಮಾಣ ಕಾಮಗಾರಿಗಳನ್ನು ಪೂರ್ಣಗೊಳಿಸಲು ಕ್ರಮ ವಹಿಸಲಾಗುವುದು.</td></tr>
<tr><td>ಇ)</td><td>ಈಗಲಾದರೂ ಹೆಚ್ಚು ಹಣ ಒದಗಿಸಿ ಈ ಭವನಗಳ ನಿರ್ಮಾಣ ಕಾರ್ಯ ಬೇಗ ಆಗುವಂತೆ ಮಾಡಲು ಸರ್ಕಾರ ಕ್ರಮ ಕೈಗೊಳ್ಳಲಾಗುವುದೇ?</td></tr>
</table>

ಸಕಇ 101 ಪಕವಿ 2021

(ಬಿ. ಶ್ರೀರಾಮುಲು)
ಸಮಾಜ ಕಲ್ಯಾಣ ಸಚಿವರು.